# ಕನ್ನಡ ಮೇಘ ಸಂದೇಶ



ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ

ಕರ್ಣಾಟಕ ಸಂಘ
ಶಿವಮೊಗ್ಗ
೧೯೩೧

[ಆರು ಆಣೆ]

## ಪ್ರಕಾಶಕರ ಮುನ್ನುಡಿ

---

ಕವಿಸಾರ್ವಭೌಮ ಕಾಳಿದಾಸನ ಸುಪ್ರಸಿದ್ಧ ಗ್ರಂಥಗಳಲ್ಲಿ ಒಂದಾದ **ಮೇಘಸಂದೇಶ**ವನ್ನು ಕನ್ನಡಿಗರ ಉಪಯೋಗಕ್ಕಾಗಿ ಪಂಡಿತ ಬ್ರ॥ ಶ್ರೀ॥ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಕನ್ನಡಿಸಿರುತ್ತಾರೆ. ಇದಕ್ಕೆ ಪೂರ್ವದಲ್ಲಿ ಆ ಮಹಾ ಕಾವ್ಯದ ಭಾಷಾಂತರಗಳು ಒಂದೆರಡು ಆಗಿರುವಂತಿದೆ. ಆದರೆ ನಮಗೆ ತಿಳಿದಮಟ್ಟಿಗೆ ಅವು ಪ್ರಚುರವಾಗಿಲ್ಲ. ಈ ಅನುವಾದವು ಕನ್ನಡಿಗರ ಆದರಕ್ಕೆ ಪಾತ್ರವಾಗುವುದೆಂದು ನಂಬಿದ್ದೇವೆ.

ಈ ಗ್ರಂಥವನ್ನು ನಮ್ಮ ಸಂಘದಿಂದ ಪ್ರಕಟಿಸಲು ಅನುಮತಿಯನ್ನಿತ್ತುದಕ್ಕಾಗಿ ಬ್ರ॥ ಶ್ರೀ॥ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳಿಗೆ ನಾವು ಬಹಳ ಕೃತಜ್ಞರಾಗಿರುವೆವು.

ಶಿವಮೊಗ್ಗ,
೮–೧೧–೧೯೩೧.

ಕಾರ್ಯದರ್ಶಿ,
**ಕರ್ಣಾಟಕ ಸಂಘ.**

# ನಿವೇದನ

ಕಾಳಿದಾಸನ ನುಡಿಯು
ಕೋಲುಜೇನಿನ ಗುಡಿಯು
ಪೇಳಿದೆನು ಕನ್ನಡದ ನುಡಿಯಿನಿದನು ।
ಕೇಳಿ ಕಳೆಯರಿದವರು
ಮೇಲೆನಿಪ ರಸಭಾವ
ದೇಳಿಗೆಗೆ ಮುದಗೊಳಲು ಸಫಲಮಲ್ತೆ ॥

ವಿರಹದೊಳು ಸತಿಪತಿಗ
ಳಿರುವ ಪರಿಯನು ತಿಳಿಪ
ಪರಶಿವನ ಮಹಿಮೆಯನು ಸಲೆ ವರ್ಣಿಪ ।
ಪರಮ ಪಾವನ ತೀರ್ಥ
ವಿರುವ ತಾಣವನೊರೆವ
ವರಕಾವ್ಯವಿದು ಬರಿದೆ ವಿರಹ ಕತೆಯೆ? ॥

ಅರಳು ಮಲ್ಲಿಗೆ ಸರವು
ಪರಿಮಳವ ಬೇಡುವುದೆ
ತರುಣಿಯರು ವಿಲಸನವ ಕಲಿಯಬೇಕೆ ।
ಸರಸ ಕವಿಗಳ ಕಾವ್ಯ
ಮರಸುವುದೆ ರಸಭರವ
ನರಿದವರು ತಿಳಿದದನು ಮುದಗೊಳುವರು ॥

---

# ಪೂರ್ವ ಮೇಘ



ಸುರನಿಕರ ಪರಿಚರಿತ
ಸರಸಿರುಹ ಮೃದುಚರಣೆ
ಶರದುದಿತ ಶಶಿವದನೆ ಲೋಕಶರಣೆ ।
ಸರಸಿಜಾಸನನರಸಿ
ಕರುಣಾ ಸುಧಾ ಸರಸಿ
ದುರಿತವಿತತಿಯನೊರಸಿ ಪಾಲಿಸೆನ್ನಂ ॥

# ಪೂರ್ವ ಮೇಘ

ಇಂದುಮುಖಿ ಮುಡಿದಿರ್ದ
ಕುಂದ ಸುಮಮಾಲಿಕೆಯ
ತಂದು ಧನಪತಿಗೀಯಲದನು ತಿಳಿದು ।
ಮಂದಮತಿ ನಿನ್ನೊಲವಿ
ನಿಂದುವದನೆಯನಗಲು
ತೊಂದಬುದವಿರುಯೆಂದು ಶಪಿಸೆ ಯಕ್ಷಂ ॥ ೧ ॥

ಧನಪತಿಯ ಶಾಪದಲಿ
ತನತು ಮಹಿಮೆಯ ನೀಗಿ
ಮನದಿನಿಯಳನ್ನುಳಿದ ಗುರು ವಿರಹದಿಂ ।
ದಿನವೊಂದು ಯುಗವಾಗ
ಲನುಭವಿಪ ವರುಷಮನ್
ನನುಭವಿಸೆ ತಾಂ ರಾಮಗಿರಿಗೆ ಬಂದಂ ॥ ೨ ॥

ಜನಕನಂದನೆ ಮಿಂದ
ಘನತೀರ್ಥದೊಳು ಮಿಂದು
ವನತರುಚ್ಛಾಯೆಯೊಳು ಬಳಲಿ ನಿಂದು ।
ಮನದ ಕರಕರೆಯಿಂದ
ಕೊನೆಗಾಣದಳಲಿದನು
ತನಿಸೊಗದೆ ಸೊಕ್ಕಿರ್ದ ಯಕ್ಷನೋರ್ವಂ ॥ ೩ ॥

ಲಲನೆಯಗಳಲದು ವಿಾರೆ
ಬಲಗುಂದಿ ಮೈಸೊರಗಿ
ಬಲದೋಳ ಬಳೆಗಳಚಿ ಬೀಳೆ ಕೈಯಿಂ ।
ಕೆಲವು ತಿಂಗಳ ಕಳೆದು
ಮಳೆಗಾಲದಾ ಮೊದಲು
ಜಳದವನು ನೋಡಿದನು ಗಿರಿ ಶಿಖರದೊಳ್ ॥ ೪ ॥

ದರಿಯನಗೆಯುವ ಕರಿಯು
ತೆರದ ಮೋಡವ ನೋಡಿ
ಚಿರಕಾಲ ಚಿಂತಿಸುತ ಮೈಮರೆದನು ।
ಕರಿಯ ಮುಗಿಲನು ನೋಡೆ
ಕೊರಗುವರು ಸುಖಿಗಳುಂ
ವಿರಹಿಗಳ ಪಾಡನ್ನು ಪೇಳ್ವುದೆಂತು ॥ ೫ ॥

ಇನ್ನು ಬಿರುವಳೆಗಾಲ
ಸನ್ನಿಹಿತವಾಗಿಹುದು
ರನ್ನೆಯನು ಸಂತೈಸಲಿದುವೆ ಸಮಯಂ ।
ತನ್ನ ಕುಶಲವನರುಹಿ
ಕನ್ನೆಯಳ ಪೊರೆಯೆಂದು
ಮನ್ನಣೆಯ ಜಲದನನು ಬೇಡಿಕೊಂಬೆ ॥ ೬ ॥

ಅರಳುತಿಹ ಮಲ್ಲಿಗೆಯ
ಬಿರುಮುಗುಳ ತಂದೆರಚಿ
ಪರಿಪರಿಯಲುಪಚರಿಸುತರ್ಘ್ಯವಿತ್ತು ।
ಕರಮುಗಿದು ಕೆಳೆಯನಿಗೆ
ಹರುಷವನು ಹಾರೈಸಿ
ಪರಮ ಪರಿತೋಷದಲಿ ನುಡಿದನಾಗ ॥ ೭ ॥

ಪರಿಕಿಸಲು ವುಗೆಬೆಂಕಿ
ಬಿರುಗಾಳಿ ನೀರಿನಿಂ
ಕರಿಮೋಡ ಮೂಡುವುದು ಜಡವಿದೆಲ್ಲಿ ।
ಪರರೊರೆದ ಮಾತುಗಳ
ಪರಿಯುರಿದು ಪೇಳ್ವುದಕೆ
ಸರಸರಾಗಿಹ ಧೀರ ಚದುರರೆಲ್ಲಿ ॥ ೮ ॥

ತಡೆದು ಚಿಂತಿಸದಿದನು
ಬಡ ಯಕ್ಷ ಮೋಹದಿಂ
ಸಡಗರದಿ ಮೋಡವನು ಬೇಡಿಕೊಂಡಂ ।
ಅಡಸಿರುವ ಕಾಮದಿಂ
ಕಡುಕುರುಡರಾದವರು
ಜಡಜೀವ ಭೇದವನು ಬಗೆಯರಲ್ತೆ ॥ ೯ ॥

ಕುಲ ಮಹಿಮೆ ವಿಭವಗಳ
ನೆಲೆಯುರಿದು ನಿನ್ನನಾಂ
ಲಲನೆಯಳಲಿಗನಾಗಿ ಬೇಡುತಿರುವೆ ।
ಕುಲಜನನು ಬೇಡಲದು
ಫಲಹೀನವಾದಡೆಯು
ಕುಲಹೀನನಿತ್ತುದಕೆ ಮೇಲೆನಿಪುದು ॥ ೧೦ ॥

ಧನಪತಿಯ ಶಾಪದಿಂ
ದಿನಿಯಳನು ನಾನಗಲಿ
ಘನಶೋಕ ಮೋಹದಿಂ ಬಸವಳಿದೆನೈ ।
ಜನದ ತಾಪವ ಕಳೆದು
ಮನಕೆ ಮೋಹವನೀವ
ಘನ ನೀನೆ ಶರಣೆಂದು ಬಗೆದು ಬಂದೆ ॥ ೧೧ ॥

ಕುಸುಮದಾರವೆಯಲ್ಲಿ
ವೊಸೆದು ನೆಲಸಿಹ ಶಿವನ
ಕಿಸುಜಡೆಯ ಶಶಿಕಲೆಯ ಬೆಳಗಿನಿಂದ ।
ಮುಸುಗಿದಳಕಾಪುರಿಯ
ದೆಸೆಗೆ ನಡೆಯಕ್ಷರಾ
ವಸತಿಯದು ನೋಡಲ್ಕೆ ರಮ್ಯಮಲ್ತೆ || ೧೨ ||

ಮುಂಗುರುಳ ನೇರೊತ್ತಿ
ಭಂಗುರಿಸಿ ಕುಡಿಪುರ್ವ
ಕಂಗಳಿಂದೀಕ್ಷಿಸುತೆ ಮೇಲೆ ನಿನ್ನಂ ।
ಅಂಗನೆಯರಾ ಪಥಿಕ
ಸಂಗಮದ ನೆನಹಿಂದ
ಸಿಂಗರಿಸಿಕೊಂಬುದಕೆ ಮನಗೊಡುವರು || ೧೩ ||

ಮೇಲೆ ನೀಂ ವೊಳಗುತಿರೆ
ಕೇಳಿ ಕಾತರರಾಗಿ
ಕಾಲದಲಿ ವಿರಹಿಣಿಯರಿಂಬುಗೊಂಡು ।
ಬಾಳದವರಾರುಂಟು
ಕೀಳಾದೆ ನಾನಿನಿತು
ಬಾಳಗೆಡಿಸಿದೆನಲ್ತೆ ಪರಸೇವೆಯಿಂ || ೧೪ ||

ಮಿಸುಗುವುದು ತಂಗಾಳಿ
ಹಸನಾಗಿ ಚಾತಕವು
ನುಸಿದೆಡಕೆ ನಿಡುಸರದಿ ಪಾಡುತಿಹುದು ।
ಬಸುರಿನಾಸರೆಯಿಂದ
ವೊಸೆದು ಬೆಳ್ವಕ್ಕಿಗಳು
ವೊಸ ಮುಗುಳ ಸರದಂತೆ ಮುಂಬರಿವುವು || ೧೫ ||

ಆಕೆ ದಿನಗಳನೆಣಿಸಿ
ನೂಕುವಳು ಸಮಯಮಂ
ತಾ ಕುಲೀನೆಯುಂ ಸತಿಯುಂ ಬದುಕಿರ್ಪಳೈ ।
ಸಾಕು ಶಂಕಿಸಬೇಡ
ಜೋಕೆಯಲಿ ಬಳಿಸಾರ್ದು
ನೀ ಕುಶಲದೊಳು ನೋಳ್ಪೆ ಸಖನರಸಿಯಂ ॥ ೧೬ ॥

ವಿರಹ ಕಾತರರಾದ
ರಮಣಿಯರ ಪಿರಿದಾಸೆ
ಜರುಗುತಿಹ ಚಿತ್ತವನು ಬಲಿದು ಬಿಗಿದು ।
ಅರಳಿ ಕಳಲುವ ಸುಮವ
ಸರದಿಯಂದದಿ ಕಟ್ಟಿ
ವಿರಹದಲಿ ಪೊರೆವುದೈ ಪ್ರಣಯಿನಿಯರಂ ॥ ೧೭ ॥

ಕಂದಳಿಯ ಮೂಡಿಸುತ
ಮುಂದಕೊದಗುವ ಬೆಳೆಸಿ
ನಂದವನು ಸೂಚಿಸುವ ಮೊಳಗ ಕೇಳಿ ।
ಚಂದದಿಂದರಸಂಚೆ
ಮುಂದುವರಿವುವು ಕಮಲ
ಕಂದಗಳ ಬುತ್ತಿಯಿಂದಾಗಸದೊಳು ॥ ೧೮ ॥

ರಾಮ ಪಾದದ ಕುರುಹಿ
ನೀಮಹೀಧರವನ್ನು
ಸಾಮದಿಂದನುಮತಿಯ ಕೇಳಿ ತೆರಳು ।
ಪ್ರೇಮದಿಂ ನೀಂ ಬರಲು
ಕಾಮಿತದ ಪದವಿತ್ತು
ತಾಂ ಮುದದಿ ಬಾಷ್ಪಮಂ ಬಿಡುವನಲ್ತೆ ॥ ೧೯ ॥

ಏಿಂಗೆ ಮೊದಲು ಸುಕರವೆನೆ
ಬಗೆಗೊಳಿಸಿ ದಾರಿಯನು
ಬಗೆದೊರೆವೆ ಸಂದೇಶವಚನವನ್ನು ।
ನಗಗಳಲಿ ನೀಂ ನಿಂದು
ಮೊಗೆಮೊಗೆದು ನೀರ್ಗುಡಿಯು
ತುಗುವ ಬಳಲಿಕೆಗಳೆದು ತೆರಳು ಸಖನೆ ॥ ೨೦ ॥

ಇಡಿದ ಕಲ್ಗಳ ಕಿತ್ತು
ಬಿಡುವುದೀ ಬಿರುಗಾಳಿ
ತಡೆವರಾರಿದನೆಂದು ಮುಖವನೆತ್ತಿ ।
ಬಿಡುಗಣ್ಣ ಸೀರೆಯರು
ಕುಡಿ ನೋಟದಿಂ ನಿನ್ನ
ಸಡಗರವ ನೋಡುವರು ಬೆಚ್ಚಿ ಬೆದರಿ ॥ ೨೧ ॥

ಸರಸ ನಿಚುಳಗಳಿಂದ
ಪರಿವರಿದ ತಾಣದಿಂ
ಭರದೊಳಾಗಸಕೇರಿ ಜಲಧಾರೆಯಿಂ ।
ದುರುತರದ ದಿಙ್ನಾಗ
ಕರದ ಗರ್ವವ ಮುರಿದು
ತೆರಳು ನೀನುತ್ತರಕೆ ಸಡಗರದೊಳು ॥ ೨೨ ॥

ಪೊಳೆವ ರತುನಗಳಂತೆ
ತಳತಳಿಪ ಶಕ್ರಧನು
ಸುಳಿದು ಪುತ್ತದಮೇಲೆ ಕಂಗೊಳಿಸುತೆ ।
ಜಳದ ನಿನ್ನಯ ತನುಗೆ
ಪೊಳೆವ ತೊಡವಾಗಿಹುದು
ಚೆಲುವ ಕೃಷ್ಣಗೆ ನವಿಲುಗರಿಯ ತೆರದೆ ॥ ೨೩ ॥

ಜಲದ ನೀನೇ ಕೃಷಿಯು
ಫಲಕೆ ಸಾಧಕನೆಂದು
ಚೆಲುವೆಯರು ನೋಡುವರು ನೇಹದಿಂದ ।
ಎಳವರೆಯು ಗಾವಿಲೆಯು
ರೊಲಪು ವೊಯ್ಯಾರಗಳ
ಕಲಿಯದಿಹ ನೋಟವಮದು ರಮ್ಯವಲ್ತೆ ॥ ೨೪ ॥

ನೇಗಲಿನ ಮೊನೆಯಿಂದ
ಸಾಗುಮಾಡಿದ ಗದ್ದೆ
ಮೂಗೊಡೆವ ಪರಿಮಳವ ಜೀರುತಿರಲು ।
ಮೇಗು ಮಾಲವನೇರಿ
ಪೋಗಿ ಪಡುವಲಗಿಳಿದು
ಬೇಗದಿಂ ಬಡಗಲಿಗೆ ಪೋಗು ಮುದದಿಂ ॥ ೨೫ ॥

ಕಾಲದಲಿ ಮಳೆಗರೆದು
ಕಾಳಕಿಚ್ಚನು ಕಳೆದು
ಮೇಲನೆಸಗಿದ ನೀನು ಬಳಲಿ ಬರಲು ।
ತಾಳುವನು ತಲೆಯಲ್ಲಿ
ಕೇಳಾಮ್ರಕೂಟಗಿರಿ
ಖೂಳನಾದರು ಸಖಸ ನಿಳಿಗೈವನೆ ॥ ೨೬ ॥

ಮಳೆಯು ನೀರಿಂ ಕಳಿವ
ಫಲದ ಕಾಳ್ಮಾವುಗಳ
ಬಿಳುಪಾಂತ ಗಿರಿಶಿಖರವೇರೆ ನೀನು ।
ಎಳನೀಲಮಣಿಯಿಂದ
ತೊಳಗುತಿಹ ಪೊಡವಿಯಾ
ಮೊಲೆಯೆಂದು ಭಾವಿಪರು ಖೇಚರಿಯರು ॥ ೨೭ ॥

ಕೆಲಕಾಲಮಲ್ಲಿರ್ದು
ಮಳೆಗರೆದು ಹಗುರಾಗಿ
ಚಲಿಸಿ ವಿಂಧ್ಯಾದ್ರಿಯೊಳು ಪೊರಳುತಿರುವಾ ।
ಬಿಳುಪೊನಲ ರೇವೆಯನು
ಶಿಲೆಗಳಲಿ ಮರಿಯಾನೆ
ತಳೆದ ಸಿಂಗರದಂತೆ ನೋಡಿ ನಲಿವೆ ॥ ೨೮ ॥

ವನಗಜದ ಮದಜಲದ
ತನಿಸೊಗಡು ಬೆರೆದಿರುವ
ವನಲತೆಯೊಳುರುಳುರುಳಿ ಪರಿವ ನೀರಂ ।
ಹನಿಗರೆದು ಲಘುವಾಗ
ಲನುವರಿದುವೊಗೆದೀಂಟ
ಲನಿಲನಲ್ಲಾಡಿಸನು ನಿನ್ನ ತನುವಂ ॥ ೨೯ ॥

ಸಾರವಾಗಿಹುದಲ್ತೆ
ಗೌರವಕೆ ಕಾರಣವು
ಸಾರವಿಲ್ಲದುದೆಲ್ಲ ಲಘುವೆನಿಪುದು ।
ನೀರಗೊಳದಿಹ ಮುಗಿಲ
ಪಾರಿಪನು ಮಾರುತನು
ನೀರುದುಂಬಿದ ಮುಗಿಲ ಮಿಸುಗಲರಿಯ ॥ ೩೦ ॥

ನಸುಬಿರಿದ ನೀಪಗಳ
ಹಸುರು ಹಳದಿಯ ಕುಸುರ
ಪೊಸ ಮುಗುಳ ಕಂದಳಿಯ ನಲಿದು ಸವಿದು ।
ಹಸಿ ನೆಲದ ಪರಿಮಳವ
ನೊಸೆವ ಸಾರಂಗಗಳು
ಪೊಸ ಮಳೆಯ ದಾರಿಯನು ಸೂಚಿಸುವುವು ॥ ೩೧ ॥

ಜಲಕಣಕೆ ಬಾಯ್ದೆರೆವ
ಚೆಲುವ ಚಾತಕೆಯನ್ನು
ಬಳಿವಿಡಿದು ಬರುತಿರುವ ಬೆಳುವಕ್ಕಿಯುಂ ।
ವೊಲಿದೆಣಿಸಿ ಖೇಚರರು
ವೊಳಗೆ ನೀಂ ಮೇಲ್ವಾಯ್ದು
ಲಲನೆಯರನಪ್ಪುತ್ತೆ ನಿನ್ನ ನುತಿಪರ್ ॥ ೩೨ ॥

ಕಡಹಾಲ ಹೂಗಂಪಿ
ನೊಡೆವೆರೆದ ಗುಡ್ಡಗಳ
ತಡಿಗಳಲಿ ನವಿಲ್ಗಳಿಂ ನಲಿವ ನಿನಗೆ ।
ತಡವಾಗದಿರದೆನುತ
ಲಡಿಗಡಿಗೆ ಚಿಂತಿಪೆನು
ಸಡಗರದೊಳೆನಗಾಗಿ ತೆರಳು ಸಖನೆ ॥ ೩೩ ॥

ಕರವೆಸೆವ ದಾಶಾರ್ಣ
ಪುರವ ನೀಂ ಪುಗುತಿರಲು
ಕರಿಹಕ್ಕಿ ಗೂಡಿಕ್ಕಿ ವೊಕ್ಕಲಿಹವು ।
ಅರಸಂಚೆಯೋಡುವವು
ಗರಿವೂವು ಬಿರಿಯುವವು
ಮೆರೆಯುವುದು ನೇರಿಳೆಯು ಕಳಿಪಣ್ಗಳಿಂ ॥ ೩೪ ॥

ಪಿರಿದೆನಿಪ ವಿದಿಶೆಯೊಳು
ಪರಿಯುತಿಹ ವೇತ್ರವತಿ
ಕಿರುದೆರೆಯ ಕುಡಿಪುರ್ವಿನೊಲಪಿನಿಂದ ।
ಸಿರಿವೊಗವ ತೋರಲದ
ಹರಿಸದಿಂ ಚುಂಬಿಸುವೆ
ಸರಸ ಫಲಮದು ನೋಡೆ ಕಾಮುಕರ್ಗೆ ॥ ೩೫ ॥

ಅರೆಪರಿದ ಕಾದಂಬ
ಸುರಭಿ ಕುಸುಮಗಳಿಂದ
ಹರುಷಪುಳಕಿತವಾದ ಕಿರುವೊರಡಿಯಾ ।
ಪೊರೆಸಾರ್ದು ಪುರಜನರ
ಸರಸ ಕೇಳಿಗೆ ನೆರೆದ
ವರ ಶಿಲಾಭವನಗಳ ಸೊಗಸ ನೋಡು ॥ ೩೬ ॥

ಪುದಿದಲರ ತಿರಿಯುತ್ತ
ಸುದತಿಯರು ಬಲುಬಳಲಿ
ಕದಪಿನಲಿ ಬೆಮರೊರಸೆ ಕನ್ನವುರವು ।
ಹದವಳಿದು ಕಳಲುವುದು
ಸದಯ ನೀಂ ನೆಳಲಿತ್ತು
ಮುದದಿಂದಲುಪಚರಿಸೆ ನಿನ್ನ ನೋಳ್ಪರ್ ॥ ೩೭ ॥

ಕ್ಷಣಕಾಲಮಲ್ಲಿರ್ದು
ಬಣಗು ದೊರೆಗಳ ತಡಿಯೊ
ಳಣಿಯಾಗಿ ಬೆಳೆದಿರ್ಪ ಪಳುವದೊಳಗೆ ।
ಮಣಿ ಸೆಂಡಿನಂತೆಸೆವ
ಗಣಿಕೆಗಳ ಬಿರುಮುಗುಳ
ಕಣಗಳಿಂ ಸಿಂಪಿಸುತೆ ತೆರಳು ಸಖನೆ ॥ ೩೮ ॥

ಉತ್ತರದ ದಾರಿಗದು
ಮತ್ತೆ ಸುತ್ತಾದಡೆಯು
ಬಿತ್ತರದ ನಗರಮಾದುಜ್ಜಯಿನಿಯಾ ।
ಎತ್ತರದ ಕರುಮಾಡ
ದೊತ್ತಿನಲಿ ನೇಹವನು
ಚಿತ್ತದೊಳು ಬೇಸರದಿ ಮರೆಯವೇಡಾ ॥ ೩೯ ॥

ವಂಚಿಸುತ ಪೊರವಮಟ್ಟು
ಸಂಚರಿಪ ಲಲನೆಯರ
ಮಿಂಚುವಳ್ಳಿಯು ಝಳಕೆ ಬೆದರುತಿರುವಾ।
ಕುಂಚಿತ ಭ್ರೂಲತೆಯು
ಚಂಚಲದ ಕುಡಿಗಣ್ಣ
ಸಂಚುಗಳ ನೋಡದಿರೆ ವಂಚಿತನಹೆ ॥ ೪೦ ॥

ಉಲಿವಂಚೆ ಕಾಂಚಿಯಿಂ
ಸುಳಿನಾಭಿ ವೀಚಿಯಿಂ
ದೊಲಪುಗಳ ತೋರುತಿಹ ನಿರ್ವಿಂಧ್ಯೆಯಾ।
ವೊಲವರಿತು ರಸಕೆಳಸ
ಲಲಸದಿರು ಲಲನೆಯರ
ವಿಲಸನವೆ ಮೊದಲ ನುಡಿ ಕಾಂತರಲ್ಲಿ ॥ ೪೧ ॥

ಸರಸ ನೀಂ ಬರದಿರಲು
ವಿರಹದಲಿ ನೆರೆ ಬತ್ತಿ
ತರಗುಗಳ ಬಿಳುಪಾಂತ ನಿರ್ವಿಂಧ್ಯೆಯುಂ।
ಪೊರೆಯೇರುವಂತೆಸಗು
ಧರೆಯೊಳಗೆ ನಾರಿಯರು
ಪಿರಿದು ಮೆಚ್ಚಿದ ನರರು ಸುಭಗರಲ್ತೆ ॥ ೪೨ ॥

ಉದಯನನ ಚರಿತೆಯೊಳು
ಚದುರರಿಂದೊಡೆವೆರೆದ
ಮೊದಲೊರೆದ ನಗರಿಯುದು ಸಿರಿಗೆ ಬೀಡು।
ಪುದಿದ ಸುಕೃತದ ಶೇಷ
ಮೊದಗಿರುವ ಸಗ್ಗಿಗರ
ಮುದದ ಭೂವಸತಿಯೆನೆ ಕಂಗೊಳಿಪುದು ॥ ೪೩ ॥

ಬಿರಿವ ತಾವರೆ ಮುಗುಳ
ನರುಗಂಪನೊಡವೆರೆದು
ಪಿರಿದೆನಿಸಿ ಸಾರಸದ ಮೆಲ್ಲುಲಿಯುನು ।
ಸುರತದಿಂ ಬಳಲಿರುವ
ತರುಣಿಯರ ಮೈಸೋಂಕಿ
ಬರುವೆಲರು ಕಾಂತನಂತುಪಚರಿಪುದು ॥ ೪೪ ॥

ತೆರೆದಿರುವ ಮಳಿಗೆಯೊಳು
ಸುರಿದಿರುವ ಶಂಖಗಳ
ಕೊರೆದ ಬಿಡುಮುತ್ತುಗಳ ಪೊಗರೊಗೆಯುವಾ ।
ಮರಕತದ ಪರಲುಗಳ
ತರಳ ಮಣಿಗಳ ನೋಡೆ
ಶರಧಿ ನೀರಿಂದುಳಿದ ತೆರದಿ ತೋರ್ಕುಂ ॥ ೪೫ ॥

ಪ್ರದ್ಯುತಿಯ ಕುವರಿಯುನು
ಕದ್ದನುದಯುನನೆಂದು
ಮದ್ದಾನೆ ಕಂಬಮುಂ ಮುರಿದುದೆಂದು ।
ಎದ್ದ ಚಿನ್ನದ ತಾಳೆ
ಯಿದ್ದುದಿಲ್ಲಿಯೆಯೆಂದು
ಸುದ್ದಿಯುನು ತಿಳಿದವರು ಪೇಳ್ವರಲ್ಲಿ ॥ ೪೬ ॥

ಎಲೆಹಸುರ ಕುದುರೆಗಳು
ಬಲ ಮದದ ದಂತಿಗಳು
ಕಲಿಭಟರು ರಾವಣನ ಸುರಗಿಯಿಂದ ।
ಕಲೆಯಾಂತ ಮೆಯ್ಯಿಂದ
ಪೊಳೆವ ಮಣಿಭೂಷಣವ
ನಿಳಿಗೈವರದೆ ತೊಡವು ಶೂರ ಜನಕೆ ॥ ೪೭ ॥

ಮುಗಮುಗಿಪ ಧೂಪಗಳ
ಹೊಗೆಗಳಿಂ ನೀಂ ಬಳೆಯೆ
ಬಗೆಗೊಂಡು ಸೋಗೆಗಳು ಕುಣಿಯುತಿಹವು ।
ಮುಗುದೆಯರ ಪದರಾಗ
ಮೊಗೆದಿರುವ ನೆಲೆಗಳೊಳು
ಸೊಗದಿ ಬಳಲಿಕೆಗಳೆದು ನೋಡು ಸಿರಿಯಂ ॥ ೪೮ ॥

ಕಾಲಕಾಲನ ಕಂಠ
ಕಾಳಿಕೆಗೆ ದೊರೆಯೆನಿಪ
ನೀಲಮೇಘನೆ ನಿನ್ನ ತನುಕಾಂತಿಯಾ ।
ಜಾಲಮಂ ನೆರೆನೋಡಿ
ಲೀಲೆಗೈವುದು ಗಣವು
ಬಾಲ ಚಂಡೀಶ್ವರನ ಪೊರೆಗೆ ಸಾರು ॥ ೪೯ ॥

ಕುವಲಯದ ರಜದಿಂದೆ
ತವೆಬೆರೆದ ಮಿಾಯುತಿಹ
ಯುವತಿಯರ ತನುಗಂಧಿ ಗಂಧವತಿಯಾ ।
ಪವನ ವಿಚಲಿತ ವಿಟಪಿ
ನವಕುಸುಮ ಪರಿಮಳದ
ಭುವನ ಪಾವನ ವನದಿ ಶಿವನು ವಸಿಪಂ ॥ ೫೦ ॥

ಬೇರೆ ಸಮಯದಿ ಪೋಗಿ
ಸೇರಿದರು ಕಾದಿರ್ದು
ಸೂರ್ಯನಸ್ತಮಿಸಲ್ಕೆ ಬಲಿ ಸಮಯದೊಳ್ ।
ಗೌರಿಯರಸನ ಬಲಿಯ
ಭೇರಿಯೊಳು ನೀಂ ಮೊಳಗಿ
ತಾರತರ ಗರ್ಜನಕೆ ಫಲವಪಡೆವೆ ॥ ೫೧ ॥

ವಿಮಲ ರತುನದ ಪಿಡಿಯ
ಚಮರವನು ವಿಭ್ರಮದಿ
ಕಮನೆಯರು ಬೀಸುತ್ತ ಕುಣಿದು ದಣಿದು ।
ಹಿಮವಳಿದ ಹನಿಯ ನೀಂ
ಚಿಮುಕಿಸಲು ಮುದಗೊಂಡು
ಕಮಲದಳಲೋಚನದೆ ನಿನ್ನ ನೋಳ್ಪರ್ ॥ ೫೨ ॥

ಸಂಜೆಗೆಂಪಿಡಿದಿರುವ
ಪಿಂಜರದ ಮೆಯ್ಯಿಂದೆ
ಮಂಜು ಭುಜತರುಗಳನು ಮುಸುಗಿನಿಂದು ।
ಮುಂಜುರಿವ ನೆತ್ತರಿನ
ಕುಂಜರದ ಪಸಿದೊವಲ
ಸಂಜೆ ನಟನಿಗೆ ಬಿಡಿಸೆ ಗೌರಿ ನಲಿವಳ್ ॥ ೫೩ ॥

ಇಡಿದಿರ್ದ ಕತ್ತಲೆಯೊ
ಳಡಿಯಿಡಲು ಮನ ಬೆದರಿ
ತಡೆದ ಕಾಮಿನಿಯರ್ಗೆ ಮಿಂಚಿನಿಂದ ।
ನಡೆವ ದಾರಿಯ ತೋರು
ಗುಡುಗಿ ಮಳೆಗರದವರ
ತಡೆಯದಿರು ಮುದಗೊಳಲಿ ಕಾಂತರೆಡೆಯೊಳ್ ॥ ೫೪ ॥

ಬಳಲಿರುವ ಮಾನಿನಿಯ
ನೊಳಗೊಂಡು ಕಲರವನು
ಮಲಗಿರುವ ಮಾಡದೊಳು ನೀನುಮಂತೆ ।
ಕಳೆದು ರಜನಿಯನಲ್ಲಿ
ಬೆಳಗಿನಲಿ ಮುಂತೆರಳು
ತಳುವರೇ ಸಖರರ್ಥಕುಜ್ಜುಗಿಪರು ॥ ೫೫ ॥

ವನಿತೆಯರ ದುಮ್ಮಾನ
ದನುನಯದ ಸಮಯವದು
ದಿನಕರನು ಕಮಲಿನಿಯ ಕಮಲಮುಖದೆ ।
ಜಿನುಗುತಿಹ ತುಹಿನಾಶ್ರು
ಕಣವನೊರಸಲು ನೀಳ್ದ
ಮಿನುಗುತಿಹ ಕರವಿಡಿಯೆ ಕೋಪಗೊಳ್ವಂ ॥ ೫೬ ॥

ಮತ್ತಲ್ಲಿ ಗಂಭೀರೆ
ಚಿತ್ತ ನಿರ್ಮಲ ಜಲದಿ
ಹೊತ್ತಿಹಳು ನಿನ್ನಯಾ ಪಡಿನೆಳಲನು ।
ಸುತ್ತುತಿಹ ಶಫರಾಕ್ಷಿ
ಯೊತ್ತರಕೆ ಬಗೆ ಸೋತು
ಹೊತ್ತ ಕಳೆಯಲು ಬೇಡ ತೆರಳು ಸಖನೆ ॥ ೫೭ ॥

ಸರಸದಿಂ ವಾನೀರ
ಕರಶಾಖೆಯಂ ಪಿಡಿದು
ತೆರೆಮುಸುಗ ಬರಸೆಳೆಯೆ ತಟವನುಳಿದಾ ।
ಪರಿವ ನೀರೆಯ ಸೇರ
ಲರಿಪೆ ತಳುವಹುದೆಂದು
ತರುಣಿಯ ಬೇಟವನು ಬಿಡುವರಾರು ॥ ೫೮ ॥

ಜಗುಳ್ದ ಮಳೆಯಿಂ ಧರೆಯೊ
ಳೊಗುವ ಸೊಗಡನು ಪೊತ್ತು
ಮೊಗೆಮೊಗೆದು ದಂತಿಗಳು ಪೀರ್ದುಬಿಡುವಾ ।
ಬಿಗಿದುದುಂಬರ ಫಲವ
ಮಿಗೆ ಕಳಿಪ ತೆಂಬೆಲರು
ಸೊಗವ ಕುಡುವುದು ನಿನಗೆ ದೇವಗಿರಿಯೊಳ್ ॥ ೫೯ ॥

ಸ್ಕಂದನಮರರ ಪೊರೆದು
ತಂದೆ ತಾಯ್ವಿರವೆರಸು
ಬಂದು ನಿಂದಿಹನಿಲ್ಲಿ ಸಾನಂದದಿಂ ।
ಸಂದ ಜಲಕುಸುಮಗಳ
ತಂದೆರೆದು ಭಕುತಿಯಿಂ
ವಂದಿಸಲು ಪಾವಕಿಯು ಮುದವ ಕುಡುವಂ ॥ ೬೦ ॥

ಸುರರ ಪೊರೆಯಲು ಮುನ್ನ
ಹರನು ಪಾವಕ ಮುಖದೆ
ಹರಿದಶ್ವ ದೀಧಿತಿಗೆ ಮಿಗಿಲೆನಿಸುವಾ ।
ಪರಮತೇಜವನಿರಿಸೆ
ಶರವಣದಿ ಪುಟ್ಟಿದನು
ಹರನರಸಿ ಹರುಷದಲಿ ಪೊರೆದಳವನಂ ॥ ೬೧ ॥

ಚಿನ್ನದೆಳೆಯಿಂ ಬೆರದ
ಕನ್ನೈದಿಲಂತೆಸೆವ
ಚೆನ್ನ ನವಿಲಿನ ಗರಿಯು ಹರನರಸಿಯು ।
ಕನ್ನವುರದೊಳು ಸುತನ
ನನ್ನಿಯಿಂ ಧರಿಸುವಳು
ಮುನ್ನಮಾ ನವಿಲನ್ನು ವೊಳಗಿ ಕುಣಿಸು ॥ ೬೨ ॥

ಇಂತು ದೇವನ ಭಜಿಸಿ
ಮುಂತೆರಳೆ ವೈಣಿಕರು
ನಿಂತ ದಾರಿಯು ಬಿಟ್ಟು ಹಿಂಜರಿವರು ।
ರಂತಿದೇವನ ಕೀರ್ತಿ
ಸಂತಸದೆ ಪರಿವಂತೆ
ಮುಂತೊಳಪ ಚರ್ಮಣ್ವತಿಯು ಪೊಸಲ ನೋಡು ॥ ೬೩ ॥

ಪೊರಸೂಸುತಿಹ ಪೊನಲು
ಭರದಿಂದ ನೋಳ್ಪರ್ಗೆ
ಧರೆಯು ಕಂಠಿಕೆಯಂತೆ ತೋರ್ಕುಮದರೊಳ್ ।
ಸುರಿ ನೀರಕೊಳಲೆಳಸಿ
ಸರಿದು ಬಾಗಿದನಿನ್ನ
ಕರಿದು ಮೈ ನೀಲಮಣಿಯಂತೆ ತೋರ್ಕುಂ ॥ ೬೪ ॥

ಸುಳಿವ ಮಧುಕರಮಾಲೆ
ಪೊಳೆವ ಕುಂದದಿ ಸೇರಿ
ಚಲಿಪಂತೆ ಕಣ್ಬೆಳಗು ಪೊರಸೂಸಲು ।
ಒಲೆವ ಕುಡಿಪುರ್ಬುಗಳ
ಮೊಲಪಿನಿಂದಶಪುರಡ
ನಳಿನಾಕ್ಷಿಯರು ನಿನ್ನ ನೋಳ್ಪರಲ್ಲಿ ॥ ೬೫ ॥

ಕ್ರೂರ ಶರವರ್ಷದಲಿ
ಶೂರ ರಾಜರ ವದನ
ನೀರಜವ ನಿನ್ನಂತೆ ನರನು ತರಿದು ।
ಘೋರ ಸಮರವ ಗೈದ
ಕೌರವರ ಭೂಮಿಯನು
ಸೇರಿ ಪಡಿನೆಳಲಿಂದಲವಗಾಹಿಸು ॥ ೬೬ ॥

ಹಲಧರನು ಬಂಧುಗಳ
ಕಲಹದಲಿ ಬೆರಸಿರದೆ
ಛಲದಿಂದ ಸರಸತಿಯ ತಡಿಗೆ ಬಂದು ।
ಲಲನೆಯರ ನಯನಾಂಕ
ಕಲಿತ ಹಾಲಾರಸವ
ಸುಳಿದಿದನು ಮನದಣಿಯೆ ಮೊಗೆದೀಂಟಿದಂ ॥ ೬೭ ॥

ಸೂತಮುನಿಯನು ತರಿದ
ಪಾತಕವನೊರಸಿದನು
ಪೂತ ಸಾರಸ್ವತದೆ ಬಲನು ಮಿಂದು ।
ಆತನಂತೆಯೆ ನೀನು
ಪೂತನಹೆಯಂತರದೊ
ಶೀತನುವಿನೊಳು ಕರ್ಪು ಸಾಜಮಲ್ತೆ ॥ ೧೮ ॥

ಕನಖಲಕೆ ನಡೆದಲ್ಲಿ
ಸನಿಹದೊಳು ಪರಿಯುತ್ತ
ಮನುಕುಲದ ಸಗರರಿಗೆ ಗತಿಯನಿತ್ತು ।
ಅಣಕಿಸುತ ಗೌರಿಯನು
ಸೆಣಸಿ ಶಿವ ಶಿರವೇರಿ
ತನು ಶಶಿಯ ಪಿಡಿದೆಳೆವ ಪೊನಲ ನೋಡು ॥ ೧೯ ॥

ಇಳಿವ ಮುಮ್ಮೈಯಿಂದ
ಜಳವ ಸೆಳೆಯುವ ನಿನ್ನ
ಮಳಿನಮಹ ತನುರುಚಿಯು ಬಳಿ ಸಾರಲು ।
ಪಳುಕಿನಂತಿಹ ಗಂಗೆ
ಎಳೆಹಸುರ ಜಗುನೆಯನು
ತಳೆದಂತೆ ತೋರುವಳು ಹಿಮಶಿಖರಿಯೊಳ್ ॥ ೨೦ ॥

ಪೊರೆದ ಮೃಗಮದದಿಂದ
ಸುರಿವ ಹಿಮಕಣದಿಂದ
ಸುರಭಿ ಶೀತಳವಾದ ಧವಳಗಿರಿಯ ।
ಸಿರದೆ ನೀಂ ನೆಲಸಿರಲು
ಹರ ವೃಷಭ ನಗೆದಿರುವ
ಕರಿಯ ಕೆಸರಿನ ತೆರದೆ ತೋರ್ಪೆ. ಸಖನೆ ॥ ೨೧ ॥

ಸರಳುಗಳ ನಿಡುಗೊಂಬು
ಸರಿದುಜ್ಜುತಿಹ ಭರದೊ
ಳುರಿ ಮಸಗಿ ಕಾಳ್ಗಿಚ್ಚು ಚಮರ ಮೃಗದ।
ಸುರುಳಿ ಬಾಲವ ಸುಡಲು
ಬಿರುವಳೆಯಿನದ ತವಿಸು
ಪರರರ್ಥಕೊದಗುವುದೆ ಸಿರಿಯ ಫಲವು ॥ ೭೨ ॥

ಅರೆಯೊಳಗೆ ಮೂಡಿರುವ
ಪರಶಿವನ ಸುರವಂದ್ಯ
ಚರಣವನು ಬಲವಂದು ಪೊಡಮಡುವರು ।
ದುರಿತ ಕೋಟಿಯನೊರಸಿ
ಕರಣವನು ಕಳೆದಂದು
ಹರುಷದಲಿ ಗಣಧರರ ಪೊರೆಯೊಳಿಹರು ॥ ೭೩ ॥

ಕರಿಯೆಂದು ಬಗೆಯುತ್ತೆ
ಶರಭಗಳು ಸಿಡುಕಿನಿಂ
ಭರದಿಂದ ಮೇಲ್ವಾಯ್ದು ಧರೆಗುರುಳಲು ।
ಸುರಿದಾಲಿಗಲ್ಲುಗಳ
ನೆರೆಬೆದರಿಸವುಗಳನು
ಬರಿದೆ ದುಡುಕಲು ನಗೆಗೆ ಪಕ್ಕಾಗರೇ ॥ ೭೪ ॥

ಮರುತನಿಂ ಕಿರುಚುತಿಹ
ಕಿರುಬಿದಿರುಕೊಳಲಾಗ
ಲುರುವ ನಿನ್ನಯ ಮೊಳಗು ಮುರಜವಾಗೆ ।
ಗಿರಿಯ ಪೊದರೊಳಗಿರ್ಪ
ಸುರವಾರ ಲಲನೆಯರು
ಪುರಹರನ ಚರಿತವನು ಪಾಡುತಿಹರು ॥ ೭೫ ॥

ನಗರಾಜರುಚಿರತೆಯು
ಬಗೆಗೊಳುತೆ ಮುಂಬರಿದು
ಮೃಗಧರನ ಮಗನೊಡನೆ ಸೆಣಸುಗೊಂಡು ।
ಭೃಗುಪತಿಯು ಶರದಿಂದ
ನಗವ ಕೊರೆದಿಹನಲ್ಲಿ
ಪುಗುತೆ ಹಂಸಗಳೊಗುವ ಪಥದಿ ತೆರಳು ॥ ೭೬ ॥

ಬಲಿದ ಮೈಯುಡ್ಡೈಸಿ
ಬಿಲದೆ ಬಡಗಲ ದೆಸೆಗೆ
ಚಲಿಪ ಕರ್ಪಿಡಿದಿರುವ ನಿನ್ನ ತನುವು ।
ಛಲದಿ ಬಲಿರಾಜನನು
ಗೆಲಲು ವಾಮನನಂದು
ಬೆಳಸಿ ನೀಡಿದ ಹೆಜ್ಜೆಯಂತೆ ತೋರ್ಕುಂ ॥ ೭೭ ॥

ಅಮರಿಯರ ವಿಭ್ರಮಕೆ
ಸಮನಿಸಿದ ಮಣಿಮುಕುರ
ಕುಮುದ ಕುಟ್ಮಲ ವಿಶದ ರುಚಿರ ಶಿಖರ ।
ಅಮರತತಿಗಾವಾಸ
ಮುಮೆಯರಸನುರುಹಾಸ
ಸಮಮೆನಿಪ ಕೈಲಾಸ ಮೆರೆವುದಲ್ಲಿ ॥ ೭೮ ॥

ಸೊಕ್ಕಿನಲಿ ದಶಮುಖನು
ತೆಕ್ಕೆಯಿಂ ಬಿಗಿದಪ್ಪಿ
ಜಕ್ಕುಲಿಸಲಾ ಗಿರಿಯು ಬೇರು ಸಡಲಿ ।
ಚಕ್ಕನುರುಳುವ ಭರಕೆ
ಕಿಕ್ಕಿರಿದ ಶೃಂಗಗಳು
ಕುಕ್ಕಲಿರಿದಂದದಲಿ ಬಾಗಿರುವವು ॥ ೭೯ ॥

ಚಾರುಸಿತ ಕರಿರದನ
ಗೌರಶಿಖರದ ಮೇಲೆ
ಪಾರೆ ನೀಂ ಕಾಡಿಗೆಯ ಪೊನಲಿಸಂತೆ ।
ತೋರುವುದು ಹಲಧರನ
ಭಾರಿ ಹೆಗಲಿನ ಮೇಲೆ
ಜಾರುತಿಹ ಕಾರುಡೆಯ ತೆರದೆ ಗಿರಿಯುಂ ॥ ೮೦ ॥

ಹರನಹಿಯ ಬಳೆಗಳೆದ
ಕರವಿಡಿದು ಹರುಷದಲಿ
ಹರನರಸಿ ಮಣಿಶಿಖರವೇರುತಿರಲು ।
ವರತನುವ ಸೋಪಾನ
ದರೆಯಂತೆ ಸಮನಿಸುತ
ಚರಣಕಮಲದ ರಜವ ಸೋಂಕಿ ಸುಖಿಸು ॥ ೮೧ ॥

ಬಜ್ಜರದ ಬಳೆಯಿಂದ
ಉಜ್ಜಿ ನೀರನು ತೆಗೆಯ
ಉಜ್ಜುಗಿಪ ತರುಣಿಯರು ಬಿಡರು ನಿನ್ನಂ ।
ನಿರ್ಜರರ ಸುದತಿಯರ
ಗರ್ಜಿಸುತೆ ಘನರವದಿ
ಬೆಜ್ಜರಿಸಿ ಮತ್ತೆಯರನುಳಿದು ತೆರಳು ॥ ೮೨ ॥

ಲಲಿತ ಹೇಮಾಂಬುಜದ
ಸಲಿಲವನು ಮೊಗೆದೀಂಟಿ
ತಳಿತ ಕಲ್ಪದ್ರುಮದ ಚಿಗುರನೊಡೆದು ।
ನೆಳಲ ಗೌಸಣಿಗೆಯಿಂ
ಕೆಳೆಯನಿಗೆ ಮುಸುಗಿಟ್ಟು
ಕೆಳೆತನದ ಚೆಲ್ಲಾಟದಿಂದೆ ಸುಖಿಸು ॥ ೮೩ ॥

ಕೆಳೆಯುನುತ್ಸಂಗದೊಳು
ಬಿಳುದುಗುಲ ಜಗುಳ್ದಂತೆ
ಬೆಳ್ವೊನಲು ಪರಿಯುತಿದೆ ಗಿರಿಯುತಟದಿ ।
ಅಳಕೆಯೆಂಬುದು ನೀನು
ತಿಳಿಯದಿರುವುದೆ ಪೇಳು
ಗಳಹಿದೆನು ಎನ್ನಳಲು ತಾಳಲರಿದು ॥ ೮೪ ॥

ಚೆಲುವ ನೆಲೆಗಳಮೇಲೆ
ನೆಲಸಿರುವ ಮೋಡದಲಿ
ಜಲಧಾರೆ ಜಗುಳುತಿರೆ ಮಳೆಗಾಲದೊಳ್ ।
ತಳೆದ ಮುತ್ತಿನ ಸರದಿ
ತೊಳಗುತಿಹ ಕಾಮಿನಿಯ
ಅಳಕದಂತೆಸೆವಳಕೆ ಕುಡುಗೆ ಮುದಮಂ ॥ ೮೫ ॥

———

# ಉತ್ತರ ಮೇಘ

ಅವಸರದೊಳರಳುತಿಹ
ನವಕುಸುಮ ಮಂಜರಿಯು
ಸವಿ ರಸವನಿಳಿಗೈವ ರಸಸೋನೆಯಾ ।
ಕವಿವರನ ಮಧುರೋಕ್ತಿ
ನವ ಕಾವ್ಯರೀತಿಯಿದು
ನವ ಸುಧಾರಸದಂತೆ ವಿಬುಧ ಸೇವ್ಯಂ ॥

## ಉತ್ತರ ಮೇಘ

**ಚೆ**ಲುವ ಮಣಿವೇದಿಕೆಯ
ಲಲನೆಯರ ತನುರುಚಿಯ
ಕಲಮುರಜ ಗಂಭೀರತರ ನಿನದದ ।
ಹೊಳೆ ಹೊಳೆವ ಚಿತ್ತರದ
ಬಲುಬಳೆದ ಕರುವಾಡ
ದಲಕೆಯದು ನೋಡಲ್ಕೆ ಜಲದ ನಿನ್ನಾ ॥ ೧ ॥

ಲಲಿತ ನೀಲಚ್ಛವಿಗೆ
ಕಲಿತ ಸೌದಾಮಿನಿಗೆ
ತಳಿತ ವೊಳಗಿನ ಮಧುರ ಘನನಿನದಕೆ ।
ಪೊಳೆವ ಕಾವನವಿಲ್ಗೆ
ಬಳೆದಿರುವ ವೈಸಿರಿಗೆ
ಬಲುತರದೆ ದೊರೆವಂದು ತೋರ್ಪುದಲ್ಲಿ ॥ ೨ ॥

ಕರದೆ ಪಿಡಿಯಲು ಕಮಲ
ಸಿರದೆ ಮುಡಿಯಲು ಕುಂದ
ಮಿರುಗು ಮೊಗದಲಿ ತಳೆಯೆ ಜಾಲಧೂಳಿ ।
ಧರಿಸೆ ಕಿವಿಯೊಳು ಸಿರಿಸ
ಮಿರುಕೆ ಕಬರಿಗೆ ಕುರುವ
ಮಿರಿಸೆ ಬೈತಲೆಗಲ್ಲಿ ನೀಪದೊರೆಗುಂ ॥ ೩ ॥

ಆವಗಂ ತರುಗಳೊಳು
ತೀವಿರ್ದ ಭೃಂಗರವ
ಮಾವಗಂ ಸರಸಿಯೊಳಗರಸಂಚೆಗಳ್ ।
ಆವಗಂ ನಲಿಯುವವು
ಕಾವಣದೆ ಸೋಗೆಗಳು
ಮಾವಗಂ ಬೆಳ್ದಿಂಗಳಲ್ಲಿ ಮೆರೆಗುಂ ॥ ೪ ॥

ಹರುಷದೊಳೆ ಕಣ್ಣೀರು
ಪರಿತಾಪ ಸುಮಶರದೆ
ವಿರಹವೆಂಬುದು ನೇಹಗಲಹದಿಂದೆ ।
ತರುಣತೆಯೆ ವಯದಲ್ಲಿ
ನಿರುಕಿಸಲು ಮತ್ತಾವ
ಪರಿಯಿಂದಲುಂ ಜನದೆ ಸೇರದಿಹವು ॥ ೫ ॥

ಅಂಗನೆಯರೊಡಗೂಡಿ
ತುಂಗಸೌಧವ ಸೇರಿ
ರಂಗುವಡೆದಿಹ ಗಾನಲೋಲರಾಗಿ ।
ಭೃಂಗಗಳು ಮುಸುರಿರುವ
ಸಿಂಗರದ ಚಷಕದೊಳ
ನಂಗ ರತಿಯುರ್ಕಿಸುವ ಸುರೆಯ ಸುರಿವರ್ ॥ ೬ ॥

ಮುರಿದ ಮಾವಿನ ಚಿಗುರ
ಪರಿಮಳವನಿಳಿಗೈವ
ಮಿರುಗು ಮೊಗಗಳ ನೆಳಲನೊಳಗೊಂಡಿಹ ।
ನೊರೆಸುತ್ತಿಯುರ್ಕುತಿಹ
ತರುಣಿಯರು ಸುರಿದುಳಿದ
ಸುರತರುವಿನಿಂದಿಳಿದ ಸುರೆಯ ಸುರಿವರ್ ॥ ೭ ॥

ಬಂದು ಮಂದಾಕಿನಿಯ
ಮಂದಮಾರುತಕೆಳಸಿ
ಕಂದೆಯರು ಮಂದಾರ ಮೂಲದಲ್ಲಿ ।
ನಿಂದು ರತುನವ ಹುಡಿಯೊ
ಳೊಂದಿಸುತ ಬೈತಿಟ್ಟು
ಕಂದೆರೆಯುದದ ಪುಡುಕಿ ನಲಿಯುತಿಹರು ॥ ೮ ॥

ಹಿಡಿಗವಡೆ ಸೆಡೆಗವಡೆ
ಸಿಡುಗವಡೆ ಕಣಮುಚ್ಚು
ಸಡೆಸೆಂಡು ಪುಟಸೆಂಡು ಗುತ್ತಿಸೆಂಡು ।
ಗುಡುಗು ಗುಮ್ಮನ ಸೋಗು
ಗುಡಿಗಟ್ಟು ಕುಂಟಪಿಲಿ
ಜಡೆಗೋಲಿನಾಟದಲಿ ನಲಿಯುತಿಹರು ॥ ೯ ॥

ಬೆಜ್ಜರದ ಮುಗುದೆಯರು
ಸೆಜ್ಜೆವನೆ ಗೈತಂದು
ಪಜ್ಜಳಿಪ ರತುನದೀವಿಗೆಯ ಮುಂದೆ ।
ಸಜ್ಜುಗೊಳುತಿಹ ಕಾಂತ
ನುಜ್ಜುಗಕೆ ಮೊಗದಿರುಹಿ
ಲಜ್ಜೆಯೊಳು ಹಿಡಿಹುಡಿಯ ದೀಪಕೆಸೆವರ್ ॥ ೧೦ ॥

ಜಾಲರಂಧ್ರದ ಮೇಲೆ
ಜೋಲುತಿಹ ಶಶಿಕಾಂತ
ಮಾಲೆಗಳು ನಡುವಿರುಳು ಮುಸುಗದಿರೆ ನೀಂ ।
ಬೀಳುತಿಹ ಶಶಿಕಿರಣ
ಜಾಳದಿಂ ನೀರೊರೆದು
ಕೇಳಿಯಿಂದಲಸಿಹರ ಮುದಗೊಳಿಪುವು ॥ ೧೧ ॥

ಗಾಳಿಯಿಂದೇಳ್ಗೆಲೆಯು
ಮೇಲೆ ಪಾರಿದ ಮುಗಿಲು
ಜಾಳರಂಧ್ರದೆ ನುಸುಳಿ ಚಿತ್ತ್ರಗಳಾ ।
ಕೀಳೆನಿಸಿ ಕಾತರದಿ
ಜಾಲಮಾರ್ಗದೆ ಧೂಪ
ಪಾಳಿಗಳ ತೆರದಿಂದ ಜಗುಳುತಿಹವು ॥ ೧೨ ॥

ಆವಗಂ ಸವೆಯುದಿಹ
ತೀವಿರ್ದ ನಿಧಿಗಳಿರೆ
ಭಾವಕಿಯರೊಡಗೂಡಿ ಯಕ್ಷರಲ್ಲಿ ।
ಕಾವನರವನೆಯಾದ
ಪೂವಿನಾರವೆಯಲ್ಲಿ
ಸೇವಿಸುತ ಗಾನವನು ಮುದಗೊಳುವರು ॥ ೧೩ ॥

ಜಾರು ಹೆಜ್ಜೆಯನಿಡಲು
ಸೋರುದುರುಬಿಂ ಜರಿದು
ಬೀರಿರುವ ಮಲ್ಲಿಗೆಯು ಕನ್ನವುರದಿಂ ।
ಜಾರಿ ಬೀಳ್ದಂಬುಜವು
ತೋರಿಪುವು ಜಾರೆಯರ
ಚೋರದಾರಿಯನಲ್ಲಿ ಸೂರ್ಯನುದಿಸಲ್ ॥ ೧೪ ॥

ಹರನಿರುವ ತಾಣವೆಂ
ದರಿದು ಮಾರನು ತನ್ನ
ಸರಳ ಬೀರನು ಭಯದೊಳವನ ಕೃತಿಯಂ ।
ತರುಣಿಯರು ಕುಡಿಪುರ್ವಿ
ನಿರದೆ ಪೊರಸೂಸುತಿಹ
ಮುರಿ ನೋಟದಿಂ ತಪ್ಪದೆಸಗುತಿಹರು ॥ ೧೫ ॥

ರಂಗುಗೊಡುವ ಲತಿಗೆಯ
ಮುಂಗುರುಳು ಮಲ್ಲಿಗೆಯ
ಭಂಗುರದ ನೋಟವುಂ ಕಲಿಪ ಮಧುವಂ ।
ಅಂಗಗಳ ತುಡುಗೆಗಳ
ಸಿಂಗರಿಸಿದುಡುಗೆಗಳ
ನಂಗರಾಗವ ಕಲ್ಪತರುವೆ ಕುಡುಗುಂ ॥ ೧೬ ॥

ಸಿರಿಪ ಗೃಹದುತ್ತರಕೆ
ಮಿರುಗುವುದು ಹರಿಧನುಗೆ
ದೊರೆಯೆನಿಪ ತೋರಣದೊಳೆನ್ನ ಗೃಹವು ।
ಅರಸಿ ಸುತ ಮೋಹದಲಿ
ಪೊರೆದ ಕಿರುಮಂದಾರ
ತರು ಪೂಗಳಿಂ ಬಾಗಿ ಮೆರೆವುದಲ್ಲಿ ॥ ೧೭ ॥

ನೀಲಮಣಿ ಸೋಪಾನ
ಜಾಲದಿಂ ಹೇಮಾಬ್ಜ
ಮಾಲೆಯಿಂ ರಾಜಿಸುವ ಸರಸಿಯುಲ್ಲಿ
ಬಾಲ ಹಂಸಾವಳಿಯು
ಖೇಳಿಪುದು ಬಿರುವಳೆಯ
ದಾಳಿಗುಂ ಮಾನಸವ ಪುಗಲೆಳಿಸದು ॥ ೧೮ ॥

ಮತ್ತದರ ಸನಿಹದೊಳು
ಕೆತ್ತ ಚಿನ್ನದ ಬಾಳೆ
ಸುತ್ತುವರಿದಿಹ ನೀಲಮಣಿ ಶೈಲವುಂ ।
ಮತ್ತಕಾಶಿನಿಗದುವೆ
ಚಿತ್ತದಾಸರವೆಂದು
ಸುತ್ತ ಮಿಂಚುವ ನಿನ್ನ ನೋಡಿ ನೆನೆವೆಂ ॥ ೧೯ ॥

ಕುರವಕದ ಬೇಲಿಯಿಂ
ಮೆರೆವ ಮಾಧವಿಲತೆಯು
ಸರಿಸದಲಿ ಚೆಂದಳಿರ ಚೆನ್ನಸುಗೆಯುಂ ।
ಸರಸಿಜಾಕ್ಷಿಯ ವಾಮ
ಚರಣತಳವನು ಬಯಸಿ
ಪೊರೆಯೇರುತೆನ್ನಂತೆ ಮೆರೆವುದಲ್ಲಿ ॥ ೨೦ ॥

ಅದರೆಡೆಯ ಕೇಸರವು
ಮದಿರಾಕ್ಷಿ ಮಧುವೀಂಟಿ
ವದನದಿಂ ಮಧುಶೇಷವೆರೆಯೆ ಚದುರಿಂ ।
ಪುದಿದಲರ ಮಧು ಸುರಭಿ
ಮದಗಂಧವುಂ ಬೀರಿ
ಮುದಗೊಳಿಪುದದೆ ಕಾಮಿಜನದೋಹದಿಂ ॥ ೨೧ ॥

ಎಳೆವಿದಿರಿನಂತೆಸೆವ
ಪಳುಕುಗಳ ಜಗುಲಿಯಲಿ
ಪೊಳೆವ ಮಿಸುನಿಯ ಗಂಬದಟ್ಟಳೆಯೊಳುಂ ।
ಸಲಿವ ನವಿಲನು ಕರದ
ಬಳೆಯ ಝುಂಕೃತಿವೆರದ
ಕಳರವದಿ ಕುಣಿಸುವಳು ಚಪಳನಯನೆ ॥ ೨೨ ॥

ಬರೆದಿಹರು ಬಾಗಿಲಲಿ
ವರಶಂಖ ಪದುಮಗಳ
ಕುರುಹುಗಳ ನಿಂತರಿತು ತಿಳಿ ಮನೆಯನು ।
ಇರದಿರಲು ನಾನಲ್ಲಿ
ಕರೆಗಟ್ಟಿ ಕಳಲಿಹುದು
ಮರೆಯಾಗೆ ರವಿ ಕಮಲ ಕಳಕಳಿಪುದೇ? ॥ ೨೩ ॥

ಮರಿಯಾನೆಯಂದದಲಿ
ಕುರುರೂಹನಳವಟ್ಟು
ಕರಮೆಸೆವ ಮೊದಲೊರೆದ ಗಿರಿಯನೇರಿ ।
ಕಿರುಮಿಂಚು ನೋಟದಲಿ
ನಿರುನಿರುಕಿ ನೋಡುತ್ತ
ಪರಿಕಿಸಂತರ್ಭವನದಿರವನಲ್ಲಿ ॥ ೨೪ ॥

ಸಾರಯೌವನೆ ಕುಂದ
ಚಾರುರದನೆಯು ಮಂದ
ಧೀರ ಗಮನೆಯು ಬಿಂಬರಕ್ತಾಧರೆ ।
ಭೀರು ಮೃಗ ಶಿಶುನಯನೆ
ನೀರೆ ಕುಚಭರ ನಮಿತೆ
ತೋರುವಳು ಕುಸುಮಶರನರಸಿಯಂತೆ ॥ ೨೫ ॥

ಸುಳಿನಾಭಿ ಬಡನಡುವು
ತೆಳುವಸಿಯು ಮಿರುಗು ಮೊಗ
ತಿಲಕದಿಂದಲಕದಿಂ ಪೊಳೆವ ನೊಸಲು ।
ನಳಿನಭವನಾದಿಯೊಳು
ಲಲನೆಯರ ಸೃಜಿಸಲ್ಕೆ
ಕಲಿತ ಕಳೆಯಾಕೆ ಮನಸಿಜ ಪತಾಕೆ ॥ ೨೬ ॥

ತೊರೆದು ನಾಂ ದೂರಮಿರೆ
ವಿರಹಕಾತರೆಯಾಗಿ
ತರುಣಿ ಸಹಚರನುಳಿದ ಕೋಕಿಯಂತೆ ।
ಸುರಿಯುತಿಹ ಹಿಮಕಣದಿ
ಬೆರೆತ ಕಮಲಿನಿಯಂತೆ
ಸೊರಗಿಹಳು ತಾನೆನ್ನ ಜೀವರತುನಂ ॥ ೨೭ ॥

ಮಿಡಿಮಿಡಿದು ಕಣ್ಪನಿಯು
ಕಡುಗೆಂಪನೊಂದಿಹುದೊ
ನಿಡುಸುಯಿಲ ಝುಳಕಧರ ಕಂದುತಿಹುದೋ ।
ಕುಡಿಕೆಯೊಳ್ಪಿಡಿದ ಮೊಗ
ಕುಡಿಗುರುಳ ಮುಸುಗಿನಲಿ
ತಡೆವ ಮೋಡದ ಸಸಿಯು ತೆರದೊಳಿಹುದೊ ॥ ೨೮ ॥

ಬಲಿ ಹರಕೆಗೊಳುತಿಹಳೊ
ಕುಲದೈವ ಗುರುಜನಕೆ
ನಲುಗಿದೆನ್ನನು ಬಗೆದು ಚಿತ್ರಿಸುವಳೊ ।
ಎಲೆ ರಸಿಕೆಯೆನ್ನವಗೆ
ಬಲು ಮೆಚ್ಚು ನೀನಲ್ತೆ
ಗಿಳಿಯೆ ಮರೆತೆಯೊ ಎಂದು ಬೆಸೆಗೊಳ್ವಳೊ ॥ ೨೯ ॥

ಕರದಿ ವೀಣೆಯುಗೊಳಲು
ಸುರಿಯುತಿಹ ಕಂಬನಿಯು
ನೊರಸೊರಸಿ ಬೆರಳಿಂದ ತಂತ್ರಿಯನ್ನು ।
ವಿರಹದೊಳು ತಾಂ ಬಗೆದ
ಸರಸ ಪದಗಳ ಪಾಡೆ
ಮರೆದಪಳೊ ಮೂರ್ಛನೆಯ ನೆನಹುದಪ್ಪಿ ॥ ೩೦ ॥

ಉಳಿದ ತಿಂಗಳ ಗುಣಿಸಿ
ಬಳಲಿ ಕೊರಗುತಲಿಹಳೊ
ಕಳೆದ ದಿನಗಳನೆಣಿಸಿ ಧೃತಿಗೊಳ್ವಳೊ ।
ತಳೆದ ಕನಸಿನೊಳೆನ್ನ
ಬಳಿಸಾರ್ದು ಸುಖಿಸುವಳೊ
ಲಲನೆಯರ ಚರಿತವಿದು ವಿರಹದಲ್ಲಿ ॥ ೩೧ ॥

ಕೆಳದಿಯರ ಬಲುಮೆಯಿಂ
ಕೆಲಪೊತ್ತು ನೂಂಕುವಳು
ಬಳಲಿಸದು ಪಗಲಲ್ಲಿ ವಿರಹಮಂತು।
ತಿಳಿಯೆ ರಜನಿಯೊಳಳಲ
ಕಳೆಯಲಾರದೆ ನೀರೆ
ತಳಮಳಿಸಿ ನೆಲದೊಳಗೆ ಪೊರಳುತಿಹಳು ॥ ೩೨ ॥

ಕೆಳದಿಯರ ಮೇಳದಲಿ
ತಿಳಿಗೊಳದ ತಡಿಯಲ್ಲಿ
ತಳಿರ ಪಾಸಿನ ಮೇಲೆ ಪಗಲ ನೂಂಕಿ।
ಅಳಲುವಳು ರಜನಿಯೊಳು
ಲಲನೆ ಕೋಕಿಯ ತೆರದಿ
ಬಳಿಸಾರ್ದು ಸಂತವಿಸು ಸತಿಯನಲ್ಲಿ ॥ ೩೩ ॥

ನಡುವಿರುಳು ಬಳಿಸಾರ್ದು
ಬಿಡದಿಯೊಳು ನೀಂ ನಿಂದು
ಮಿಡುಕುತಿಹ ಸತಿಯಳನು ಸಂತೈಸುತೆ।
ಬಿಡದೆನ್ನ ಸಂದೇಶ
ನುಡಿಗಳನು ತಿಳಿಸುತ್ತೆ
ಸಡಗರದಿ ಮುದಗೊಳಿಸು ಮಡದಿಯಳನು ॥ ೩೪ ॥

ತಳಿರ ಪಾಸಿನಮೇಲೆ
ತಲೆಗೆ ತೋಳಿಂಬಿಟ್ಟು
ಮಲಗಿರುವ ನಳಿನಮುಖಿ ಮೂಡಲಲ್ಲಿ।
ಉಳಿದೊಂದು ಕಳೆಯಿಂದ
ಪೊಳೆಯುತಿಹ ಶಶಿಯಂತೆ
ಕಳೆವೆತ್ತು ವೈಬತ್ತಿ ಕಂಗೊಳಿಪಳು ॥ ೩೫ ॥

ತಾನಾವ ರಜನಿಯನು
ನಾನಾ ವಿಹಾರದಲಿ
ವಿಾನಾಯತಾಕ್ಷಿ ಲವವಾಗಿ ಬಗೆದು।
ನಾನಿರಲು ಕಳೆದಿಹಳೊ
ತಾನೀಗಲಾ ನಿಶಿಯ
ದೀನಾರ್ತೆಯಾಗಿ ಯುಗದಂತೆ ಬಗೆವಳ್ ॥ ೩೬ ॥

ಜಾಲದೊಳು ಶಶಿಕರವ
ಲೀಲೆಯಿಂ ನಸುನೋಡಿ
ತಾಳಲಾರದೆ ತಿರುಗೆ ಕಂಬನಿಗಳಾ।
ಪಾಳಿಯಿಂದರೆಮುಚ್ಚಿ
ದಾಲಿಗಳು ತೋರುವುವು
ಬೀಳು ಮಳೆಯಿಂ ಪಗಲ ಕಮಲದಂತೆ ॥ ೩೭ ॥

ಬಿಸುಸುಯಿಲ ಝಳದಿಂದ
ಮಸುಳಿತಧರದ ಕೆಂಪು
ಕುಸುಮತೈಲವನುಳಿದು ಬರಿ ನೀರಿನಿಂ।
ಹೊಸಹೊಸೆದು ಬಿರುಸಾಗಿ
ಕುಸಿದು ಜಗುಳುವ ಕುರುಳು
ಬಸಿದಿರುವ ಕದಪಿನಲಿ ಜೋಲುತಿಹುದು ॥ ೩೮ ॥

ಕನಸಿನೊಳಗಾದೊಡಂ
ನನತು ಕೇಳಿಯ ಬಯಸಿ
ಮನದೊಳಾಶಿಸುತಿಹಳು ನಿದ್ರೆಯನ್ನು।
ಹನಿಗಟ್ಟುತೆವೆಯೊಳಗೆ
ಪೊನಲಿಡುವ ಕಣ್ಣೀರಿ
ನಿನಿತಾದೊಡಂ ನಿದ್ದೆ ಬರಲರಿಯದು ॥ ೩೯ ॥

ಬೆರಲು ಸೋಂಕಲು ಪೀಂಕಿ
ಬಿರುಸಾಂತು ಕೆದರಿರುವ
ಕುರುಳು ಕದಪಿನಮೇಲೆ ಜಗುಳುತಿರಲು ।
ಮುರಿಯದುಗುರಿಂದದನು
ಬರೆಸೆಳೆದು ತೆಗೆ ತೆಗೆದು
ಬರಿದೆ ನೂಂಕುತ ಬಳಲಿ ಬೇಸರಿಪಳು ॥ ೪೦ ॥

ವಿರಹದಾ ಮೊದಲು ದಿನ
ಕರೆಕರೆದು ಕಣ್ಣೀರ
ಬಿರುಮುಡಿಯ ಕಟ್ಟಿದೆಸು ಮಾಲೆಯುಳಿದು ।
ಕರಕರೆಯು ಕಳೆದಂದು
ಬಿರಿಮುಗುಳ ತಿರಿತಂದು
ಕುರುಳ ನೇವರಿಸುತ್ತ ತುರುಬ ಬಲಿವೆಂ ॥ ೪೧ ॥

ಬಲವಳಿಯೆ ಮೃದುಗಾತ್ರಿ
ಕಳಚಿಟ್ಟು ತೊಡವುಗಳ
ಕಳವಳಿಸಿ ಪಾಸಿನೊಳು ಪೊರಳುತಿಹಳು ।
ಅಳಲು ನಿನಗುಂ ಸಖನೆ
ಪಳಚುವುದು ಕಣ್ಣೀರ
ನಳಲ ಸಹಿಸುವರೆಂತು ಕರುಣಾರ್ದ್ರರು ॥ ೪೨ ॥

ಇನಿಯುಳನುರಾಗವನು
ಮನವರಿದು ವಿರಹದೊಳ
ಗನುಭವಿಪ ಬೇಗುದಿಯನನುಭವಿಸುತೆ ।
ನೆನೆ ನೆನೆದು ತಿಳುಹಿದೆನು
ಬಿನುಗಿನಿಂ ಗಳಹಿದೆನೆ
ಮನಗೊಳುವೆ ನೀನೆನ್ನ ಸಖಿಯುಳಿರವಂ ॥ ೪೩ ॥

ಮುಸುಗಿದಳಕಗಳಿಂದ
ಶಶಿಮುಖಿಯ ಕಣ್ಬೊಗರು
ಪಸರಿಸದು ಸುರೆಯುಳಿಯೆ ಕುಡಿಪುರ್ವುಗಳ್ ।
ಮಿಸುಕಲಮ್ಮವು ದಿಟ್ಟಿ
ವಸೆದೆಡಕೆ ಪಾರುವುದು
ನಸುಚಲಿಪ ಮೀನ್ಗಳಿಂ ನೈದಿಲಂತೆ ॥ ೪೪ ॥

ತರಳಮಣಿ ಕಾಂಚನದ
ವರಕಾಂಚಿಯುನ್ನಳಿದ
ಸರಸ ಕದಳಿಯುದಿಗುಡ ಪಳಿಯುತಿರುವಾ ।
ಕಿರಿದುಗುಗುರ್ಗೊನೆಯೊತ್ತ
ಕುರುಹಿಲ್ಲದೆಡದೊಡೆಯು
ಕಿರುನಡುಗೆ ನೀವಿಯುಂ ನಸುಚಲಿಪುದು ॥ ೪೫ ॥

ಮಡದಿ ನಿದ್ರೆಯೊಳಿರಲು
ತಡೆ ಜಾವ ಪರ್ಯಂತ
ಗುಡುಗುತೆಬ್ಬಿಸಬೇಡ ಸಡಗರದೊಳು ।
ಪಡೆದಿರುವ ಕನಸಿನೊಳು
ಕಡುಮೋಹದೊಳಗೆನ್ನ
ನಿಡುದೋಳ್ಗಳಪ್ಪುಗೆಯು ಸಡಿಲದಿರಲಿ ॥ ೪೬ ॥

ಕಿರುಪನಿಗಳುದುರುತಿಹ
ಪರಿಮಳದ ಗಾಳಿಯಿಂ
ದರಸಿಯುಳನೆಚ್ಚರಿಸಿ ದೂರ ನಿಂದು ।
ತರಹರಿಸಿ ನಿರುಕಿಸಲು
ಬರಿಮಿಂಚಿ ಬೆದರಿಸದೆ
ತರವರಿಸದೇ ಪೇಳು ಸವಿನುಡಿಗಳಂ ॥ ೪೭ ॥

ತಿಳಿ ಮುದದಿ ಮುತ್ತೈದೆ
ಕೆಳೆಯ ನಿನ್ನರಸನಿಗೆ
ಜಲದವೆಂಬರು ನನ್ನ ಶಂಕಿಸದಿರು ।
ತಿಳುಪೆ ಕುಶಲವನೆನ್ನ
ಕಳುಹಿದನು ನಿನ್ನರಸ
ಬಳಿಸಾರ್ದೆ ವಿರಹಿಗಳ ನೇಹಿಗನು ನಾಂ ॥ ೪೮ ॥

ನಿನ್ನ ನುಡಿಯನು ಕೇಳ್ದು
ರನ್ನೆ ತಾಂ ನಲಿಯುವಳು
ಮುನ್ನ ಹನುಮನ ಕಂಡ ಸೀತೆಯಂತೆ ।
ತನ್ನೆರೆಯನೊಸಗೆಯಂ
ನನ್ನಿಗರು ಪೇಳಲದು
ಚೆನ್ನಿಗನ ಸಂಗಮಕೆ ಸಾಟಿಯಲ್ತೆ ॥ ೪೯ ॥

ದೀನ ನಾನೆಂದರಿತು
ಮಾನಿನಿಯಳಳಲರಿದು
ನೀನು ಜಸಮನೆ ಬಯಸಿ ಪೇಳ್ವುದಿಂತು ।
ತಾನೊರೆದು ಕುಶಲವನು
ನೀನಿರ್ಪುದನು ಕೇಳ್ವ
ವಿಾನುಡಿಯು ವೊದಲಲ್ತೆ ದುಃಖಿತರ್ಗೆ ॥ ೫೦ ॥

ರಾಮಗಿರಿಯೊಳು ನಿಂದು
ಕಾಮನುರು ಬೆಗೆಸಂದು
ತಾಮರಸದಳನಯನೆ ಜೀವಿಸಿರ್ಪಂ ।
ಭಾಮೆ ನಿನ್ನನು ತೊರೆದು
ಭೂಮಿಯೊಳು ಬದುಕಿಹುದು
ಭೂಮ ಭಾಗ್ಯವು ನಿನ್ನ ಕಂಠಮಣಿಯಾ ॥ ೫೧ ॥

ಕೊರಗುತಿಹೆ ದೂರದೊಳು
ಕರುಬನಹ ದುರ್ವಿಧಿಯು
ಬರಗೊಳಿಸನಿದಕೇನಗೈವೆಸಬಲೆ।
ಬಿಸುಸುಯಿಲು ಮನದಳಲು
ಬರೆತ ವೈಕಣ್ಣೀರು
ನಿರುತಮೆವಿರ್ವ್ಮಾರ್ವರಿಗುಮೆಂದು ಬಗೆವಂ ॥ ೫೨ ॥

ನಿನ್ನ ಸಖಿಯರ ಮುಂದೆ
ಮುನ್ನ ತಾ ನೊರೆವುದನು
ಕನ್ನದಲಿ ಪೇಳಿದನೊ ಸೋಂಕನೆಳಸಿ ।
ರನ್ನೆ ದೂರದೊಳಿರ್ಪ
ನಿನ್ನಿನಿಯ ನೀನುಡಿಯು
ನನ್ನ ಮುಖದಿಂ ಪೇಳ್ವನೀಗಲಿಂತು ॥ ೫೩ ॥

ಎಳಲತೆಯೊಳಂಗಮುಂ
ಪೊಳೆವ ಶಶಿಯೊಳು ಮೊಗವ
ಸೆಳೆ ವೀಚಿಯೊಳು ಪುರ್ವಿನೊಲಿದಾಟಮುಂ ।
ಅಳಿಗಳೊಳು ಸುಳಿಗುರುಳ
ನೆಳಚಿಗುರಿಯೊಳು ಕಣ್ಣ
ನೆಳಸಿದರು ನಿನ್ನಂಗ ಸಾಮ್ಯವಿರದು ॥ ೫೪ ॥

ಕುಸುಮಗಂಧಿಯನುಳಿಯೆ
ಪೊಸಮಳೆಯುಗಾಲದೊಳೆ
ಕುಸುಮಶರ ಕೊರೆಯುತಿಹನೆನ್ನನಿಂತು ।
ಅಸವಸದೆ ಕಾರ್ಮುಗಿಲು
ದಶದಿಸೆಯ ಮುಸುಗುತಿರೆ
ಬಸಮೆಂತು ಬದುಕುವೆನೆ ಪೇಳು ಮುಗುದೇ ॥ ೫೫ ॥

ಮುಳಿದ ನಿನ್ನಯ ರೂಹ
ಶಿಲೆಯೊಳಗೆ ಬರೆದದರ
ಬಲಗಾಲ್ಗೆ ಕೆಡೆದೆನ್ನ ಬರೆಯಲೆಳಸೆ ।
ಕಳಕಳನೆ ಕಣ್ಣೀರು
ಪಳಚುವುದು ನಾವಿಂತು
ಕಲೆಯೆ ವಿಧಿಯಲ್ಲಿಯುಂ ಕರುಬುತಿಹಸು ॥ ೫೬ ॥

ಕನಸಿನೊಳು ಬಳಿಯೊಂದಿ
ದಿನಿಯಳನು ಬಿಗಿದಪ್ಪ
ಲೆಣಿಸಿ ನಿಡುದೋಳ್ಗಳಂ ಬರಿದೆ ನೆಗಹಲ್ ।
ವನದೇವಿಯರು ನೋಡಿ
ಕನಿಕರದಿ ಕಣ್ಣೀರ
ಪನಿಗಳಂ ತಳಿರಿನೊಳು ಕರೆಯುತಿಹರು ॥ ೫೭ ॥

ಸರಳಗಳ ತಳಿರೊಡೆದು
ಸುರಿವ ಕೀರದಿ ಬೆರೆದು
ಸುರಿಮಂಜು ಗಿರಿಯಿಂದ ಬರುವ ಗಾಳಿ ।
ಅರಸಿ ನಿನ್ನಂಗವನು
ಬರುತ ಸೋಂಕಿಹುದೆಂದು
ಬರಸೆಳೆದು ಬಿಗಿಯಪ್ಪಿ ಜೀವಿಸಿಹೆನು ॥ ೫೮ ॥

ಇರುಳ ಕಳೆವುದದೆಂತು
ಕರಗುವುದು ಪಗಲೆಂತು
ವಿರಹದೊಳು ಬಲು ಬಳೆದು ಕೊರಗಿಸುವವು ।
ನೆರೆಬಯಕೆ ಬಯಲಾಯ್ತು
ತರಹರಿಸಲರಿದಿನ್ನು
ಹರಿಣಾಕ್ಷಿ ನಿನ್ನುಳಿಯೆ ಶರಣರಾರು ॥ ೫೯ ॥

ನಿಡುಸುಯಿಲಿನಿಂದಿರುಳು
ಕಡುತಾಪದಿಂ ಪಗಲು
ಬಿಡದೆ ಸೆಣಸುತ ಬಳೆದು ತಳಮಳಿಪುವು।
ಕಡೆಗಣಿಸಲಳವಲ್ಲ
ಕುಡಿವಡೆವ ಬಯಕೆಗಳು
ಪಿಡಿದೆನ್ನ ಜೀವಿತವ ನಿಲಿಸಿರುವುವು ॥ ೬೦ ॥

ಅರಿದು ನನ್ನಿಂ ನಾನೆ
ಧರಿಸಿಹೆನು ಜೀವಿತವ
ತರಳೆ ನೀಂ ಬೆದರದಿರು ಸುಖದುಃಖಗಳ್।
ತರತರದಲೊದಗುವವು
ತಿರುಗಾಲಿಯುರದಂತೆ
ಜರುಗುವುದು ಜಾರುವುದು ಸಹಜಮಲ್ತೆ ॥ ೬೧ ॥

ಯೋಗನಿದ್ರೆಯನುಳಿಯೆ
ಭೋಗಿಶಯನನು ಯೆವಗೆ
ನೀಗುವುದು ಶಾಪದಿಂದೊಗೆದ ವಿರಹಂ।
ಸೋಗಿನಲಿ ಕಣ್ಣುಮುಚ್ಚಿ
ಬೇಗ ತೆರೆವಂದದಲಿ
ನೀಗು ನೀನುಳಿದಿರುವ ನಾಲ್ದಿಂಗಳಂ ॥ ೬೨ ॥

ಸರಸಿಗಳ ತಡಿಯಲ್ಲಿ
ತರುಗಳಾರವೆಯಲ್ಲಿ
ಶರದಿಂದುಕರರುಚಿರ ರಜನಿಯಲ್ಲಿ।
ವಿರಹದಲಿ ಗುಣಿಸಿಟ್ಟ
ಪರಿಪರಿಯ ಸುಖಗಳನು
ಸರಸದಿಂದನುಭವಿಸಿ ಮುದಗೊಳುವೆವು ॥ ೬೩ ॥

ಮುನ್ನೊಂದು ದಿನದಲ್ಲಿ
ಎನ್ನ ತೋಳ್ಸೆರೆಯಲ್ಲಿ
ನನ್ನಿಯಿಂ ನಿದ್ರಿಸುತೆ ಜಗ್ಗನೆದ್ದು ।
ರನ್ನೆ ನೀನಳುತಿರಲು
ನಿನ್ನ ನಾಂ ಬರಸೆಳೆದು
ಮನ್ನಿಸುತ ಕೇಳಿದೆನು ಪ್ರೊತ್ತರದೊಳು ॥ ೬೪ ॥

ಮನಸಿಜನ ಮರಿಯಾನೆ
ಮುನಿಸಿದೇತಕೆ ಪೇಳೆ
ಯೆನೆ ಕಿತವ ಕನಸಿನೊಳು ಮತ್ತೋರ್ವಳಂ ।
ಅನುವರಿಸಿದುದಕೆಂದು
ಕಿನಿಸಿನಿಂ ಪೇಳಿದುದು
ನೆನಹಿರಲಿ ಬೇರೊಂದನೆಣಿಸಬೇಡ ॥ ೬೫ ॥

ಕುರುಹಿನಿಂ ಕುಶಲವನು
ನೆರೆನಂಬು ಮದಿರಾಕ್ಷಿ
ಬರಿಜನರ ನುಡಿಯಿಂದ ಬೆದರಬೇಡ ।
ಗುರುವಿರಹದಿಂ ಪ್ರೇಮ
ಮರೆಯುವುದು ತಾನಲ್ಲ
ಮುರೆ ಬಳೆವುದಾಸೆಯಿಂ ಭೋಗಿಸದಿರಲ್ ॥ ೬೬ ॥

ಅರುಹಿ ಕುಶಲವನಿಂತು
ವಿರಹದಿಂ ಬಳಲುತಿಹ
ತರಳೆಯಂ ಸಂತವಿಸಿ ಮಡದಿ ನುಡಿದಾ ।
ಕುರುಪಿಡಿದ ನುಡಿಯಿಂದ
ವಿರಹಿಯಾದೆನ್ನನುಂ
ಕರುಣೆಯಿಂದುಳುಹು ನೀಂ ತಿರುಗಿ ಬಂದು ॥ ೬೭ ॥

ಹರವೃಷಭ ನಗೆದಿರುವ
ಗಿರಿಕಟಕದಿಂ ಬೇಗ
ತಿರುಗಿ ಬಂದೆನಗರುಹಿ ಸತಿಯುಳಿರವಂ ।
ಅರುಣ ಕಿರಣದೆ ಕಳಲಿ
ಜರಿವ ಕುಂದದ ತೆರದ
ಜರುಗು ಜೀವವನುಳುಹು ತೆನ್ನ ಪೊರೆಯೈ ॥ ೬೮ ॥

ಇನಿತೆನ್ನ ಮನದೊಲವ
ನನುವರಿದು ನೀಂ ಮಾಳ್ಪೆ
ಮನಗೊಳುವೆ ನಿನ್ನ ನಾಂ ಮೌನದಿಂದೆ ।
ದನಿಗುಡದೆ ಚಾತಕಿಗೆ
ಹನಿಗಳುದುರಿಸುತಿರ್ಪೆ
ಘನಮುಹಿಮರುತ್ತರವು ಕಾರ್ಯಮಲ್ತೆ ॥ ೬೯ ॥

ಬಳಲಿ ಬೇಡಿದನೆಂದು
ಕೆಳೆಯು ತಾನಿವನೆಂದು
ಲಲನೆಯುನ್ನುಳಿದಿರುವ ದೀನನೆಂದು ।
ತಿಳಿದು ಕೀಳಾದೊಡೆಯು
ಮೆಳಸದೀ ಕಾರ್ಯವನು
ಜಲದ ದಯೆಯಿಂದೆಸಗಿ ಸಲಹುಯೆಮ್ಮಂ ॥ ೭೦ ॥

ಕನಿಕರದೊಳಿದನೆಸಗಿ
ಘನ ಸಮಯ ಲಕ್ಷ್ಮಿಯಿಂ
ದಿನಿಯಳಹ ತರಳೆಯಿಂ ಕ್ಷಣಮಗಲದೆ ।
ಮನವೊಲಿದ ಭೋಗದಿಂ
ದನವರತ ಸುಖದಿಂದ
ಘನಮುಹಿಮ ಸಂಚರಿಸು ನೀಂಧರೆಯೊಳು ॥ ೭೧ ॥

* ಗ್ರಂಥಾಂತ್ಯದಲ್ಲಿ ಕಂಡುಬರುವ ಪ್ರಕ್ಷಿಪ್ತ ಶ್ಲೋಕಗಳ ಅನುವಾದ—

ಇಂತುಸುರೆ ಜಲಧರನು
ಸಂತಸದಿ ನಳಕೆಯೊಳು
ಮುಂತಿಳಿದ ಕುರುಹಿನಿಂದರಿದು ಗೃಹಮಂ ।
ಚಿಂತಿಸುವ ಕಾಂತೆಯಂ
ಸಂತವಿಸಿ ಮೃದುರವದೊ
ಳಂತೆ ಕಾಂತನ ಮಧುರ ನುಡಿಯ ಪೇಳ್ದಂ ॥ ೧ ॥

ಕದಪ್ಪಿನೊಳು ಕೈಯಿಟ್ಟು
ಸುದತಿ ತನ್ನಿನಿಯನಾ
ಮೃದುನುಡಿಯ ಲಾಲಿಸುತೆ ಮುದಗೊಂಡಳು ।
ಪುದಿದಳಲಿನಿಂ ಜನರು
ಸದಯರಲಿ ಬೇಡಲದು
ಪೊದವಿದಗ್ಗದ ಫಲವನೀಯುದಿಹುದೆ ॥ ೨ ॥

ಜಲಧರನ ವಚನವನು
ನಲಿದು ಲಾಲಿಸಿ ಧನದ
ನೊಲಿದು ಶಾಪವ ಕಳೆದು ಸದಯನಾಗಿ ।
ಕಲೆತ ದಂಪತಿಗಳಿಗೆ
ಹಲವು ಭೋಗವನಿತ್ತು
ಸಲಹಿದಂ ಮುದದಿಂದ ನಲಿದರವರುಂ ॥ ೩ ॥

---

2526—31 ಬೆಂಗಳೂರು ಪ್ರೆಸ್, ಬೆಂಗಳೂರು ಸಿಟಿ.